ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ರಾಜ್ಯದಲ್ಲಿರುವ ಅರಣ್ಯ ಭೂಮಿ, ಕಾಡು ಪ್ರಾಣಿಗಳ ನಿಯಂತ್ರಣ ಮತ್ತು ಅಭಿವೃದ್ಧಿ ಕಾಮಗಾರಿಗಳ ಕುರಿತು

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು):-

796 (924) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿರುವ ಮೀಸಲು ಅರಣ್ಯ, ಗ್ರಾಮ ಅರಣ್ಯ, ರಕ್ಷಿತ ಅರಣ್ಯ, ಖಾಸಗಿ ಆರಣ್ಯ, ಶಾಸನಬದ್ಧ ಅರಣ್ಯ, ಹಾಗೂ ಸರ್ಕಾರಿ ದಾಖಲೆಗಳಲ್ಲಿ ಅರಣ್ಯವೆಂದು ನಮೂದಿಸಿರುವ ಪ್ರದೇಶಗಳ ವಿಸ್ತೀರ್ಣವೆಷ್ಟು; (ವೃತ್ತವಾರು, ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು)

(ಆ) ಇಲಾಖೆಯಿಂದ ಆನೆ, ಕಾಡು ಕೋಣ, ಜಿಂಕೆ, ಹಂದಿ, ನವಿಲು, ಮಂಗ ಮೊದಲಾದ ಕಾಡು ಪ್ರಾಣಿ ಪಕ್ಷಿಗಳಿಂದ ಕೃಷಿಯ ಮೇಲಾಗುತ್ತಿರುವ ಹಾನಿಗೆ ಪರಿಹಾರ ನೀಡುವ ಸಂಬಂಧ ಮತ್ತು ಕಾಡು ಪ್ರಾಣಿಗಳ ನಿಯಂತ್ರಣಕ್ಕಾಗಿ ಹೊರಡಿಸಲಾದ ಸುತ್ತೋಲೆಗಳ ಸಂಖ್ಯೆ ಎಷ್ಟು ; (ಸುತ್ತೋಲೆಗಳ ಪ್ರತಿಯನ್ನು ನೀಡುವುದು) ವಿವಿಧ ನ್ಯಾಯಾಲಯಗಳಿಂದ ಯಾವ ಯಾವ ಪ್ರಕರಣಗಳಲ್ಲಿ ಇಲಾಖೆಗೆ ಈ ಸಂಬಂಧ ನಿವೇಶನವನ್ನು ನೀಡಲಾಗಿದೆ ; (ಪ್ರಕರಣವಾರು ನ್ಯಾಯಾಲಯದ ತೀರ್ಪಿನ ಪ್ರತಿ ಒದಗಿಸುವುದು)

(ಇ) ಸಾರ್ವಜನಿಕ ಹಿತಾಸಕ್ತಿಯ ಉದ್ದೇಶಗಳಿಗಾಗಿ ಸರ್ಕಾರಿ ಇಲಾಖೆಗಳ ಅಭಿವೃದ್ಧಿ ಕಾಮಗಾರಿಗಳಿಗೆ ಬಿಟ್ಟುಕೊಡಲು ಇಲಾಖೆಯಿಂದ ಮಾರ್ಗಸೂಚಿ ರೂಪಿಸಲಾಗಿದೆಯೇ ; ಹಾಗೂ ಇವುಗಳಿಗೆ ಬದಲಿಯಾಗಿ ಜಾಗವನ್ನು ಪಡೆಯಲು ಇರುವ ಮಾನದಂಡವೇನು ; (ಆದೇಶದ ಪ್ರತಿ ಒದಗಿಸುವುದು)

(ಈ) ರಾಜ್ಯದಲ್ಲಿ ಈ ತನಕ ಎಷ್ಟು ಎಕರೆ ಜಾಗವನ್ನು ಈ ಉದ್ದೇಶಕ್ಕಾಗಿ ಬಿಟ್ಟು ಕೊಡಲಾಗಿದೆ ಮತ್ತು ಬದಲಿಯಾಗಿ ಪಡೆದ ಭೂಮಿಯ ವಿಸ್ತೀರ್ಣವೆಷ್ಟು ? (ಜಿಲ್ಲಾವಾರು, ತಾಲ್ಲೂಕುವಾರು, ಅಭಿವೃದ್ಧಿ ಕಾಮಗಾರಿವಾರು ಮಾಹಿತಿ ಒದಗಿಸುವುದು)